4. Aspiring bidders/Contractors who have not obtained the user ID & Password for participating in e-tendering in BDA, may now obtain the same from the website www.tenderwizard.com/BDA through link "Register Me".
5. A Training programme on e tendering will be conducted for the aspiring bidders/Contractors on 13-12-2004 at the office of the undersigned. Those who wish to undergo training should confirm through telephone with PRO Section BDA.
6. Bidders/Contractors can access e-tender form (tender document) by making payment of amount as shown in the above table towards the cost of documents through Demand Draft in favor "Bangalore Development Authority, Bangalore". The e-tender document can be accessed / downloaded only after receipt of DD towards tender document fee.
7. User ID & Password will be issued to the contractor only on presenting the Pass book (Contractors Registration Book) and entries will be made in the pass book at the time of registering for User ID & Password. If the contractor is unable to collect the User ID & Password in person, the same may be obtained through a representative with an authorisation letter duly attesting his signature along with production of Pass book.
8. Non-submission of tender attracts action as per conditions stipulated in the rules of Registration of Contractors.
9. EMD shall be paid only in the form of Pay order / Demand draft in favour of Bangalore Development Authority, Bangalore and scanned copy shall be enclosed.
10. The item rates and total amount shall be clearly and legibly typed both in figures and words in English only.
11. The successful tenderer will have to execute an agreement in Form PWG 65 KPWD Vol. No. II Para 167(I) (as amended from time to time) with the Executive Engineer, North Division within seven days upon receipt of intimation, failing which his tender will be rejected.
12. The work shall be commenced with all earnestness within seven days from the date of issue of work order, failing which it would be presumed that he is not interested in the work and action will be taken to get the work executed through alternate agency at the risk and cost of the former tenderer.
13. Bidders/Contractors can access tender documents on the website, fill them and submit the completed tender document into electronic tender on the website itself. The EMD shall be scanned and attached to the e-tender document and Demand Draft (DD) towards EMD should be submitted to Executive Engineer, Electrical Division, BDA, Bangalore on or before 4:30 pm on 15-01-2005. (Before Tender Opening Time) Failing which the firm/contractor will be disqualified.
14. Bidders/Contractors Should attach all the Scanned copies of certificates pertaining to their prequalification failing which their tenders will be disqualified.
15. Corrigendums / modifications / corrections, if any, will be published in the website.
16. The Engineer Member reserves the right to accept / reject any or all tenders without assigning any reasons.
17. Further details of work can be obtained in the Office of the Executive Engineer, Electrical Divn., BDA, T. Chowdaiah Road, K.P. West, Bangalore on all working days between 3:30 pm to 5:30 pm.

PD-114

Engineer Member
Bangalore Development Authority, Bangalore

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಭದ್ರಾವತಿ ವಿಭಾಗ ಇವರ ಕಾರ್ಯಾಲಯ**

**ಸಂಖ್ಯೆ: ಬಿ4 71ಎ ಸಿಆರ್ 1/2004-05, ದಿನಾಂಕ: 8ನೇ ಡಿಸೆಂಬರ್ 2004**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ವಿಭಾಗದ ಅರಣ್ಯ ಮೊಕದ್ದಮೆಯಲ್ಲಿ ಅಮಾನತ್ತುಪಡಿಸಿ ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಂಡ ಕೆಳಕಂಡ ವಾಹನಗಳನ್ನು ಅವು ಎಲ್ಲಿ ಹೇಗಿವೆಯೋ ಹಾಗೇ ಈ ಕೆಳಗೆ ನಮೂದಿಸಿರುವಂತೆ ಸ್ಥಳದಲ್ಲಿಯೇ ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಿಂದ ಪ್ರಕಟಣೆ ಷರತ್ತಿಗೊಳಪಟ್ಟಂತೆ ಅವುಗಳ ಎದುರು ತೋರಿಸಿದ ದಿನಾಂಕಗಳು ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು. ಇಷ್ಟವುಳ್ಳವರು ನಿಗದಿಪಡಿಸಿದ ಠೇವಣಿ ಹಣವನ್ನು ಮುಂಗಡವಾಗಿ ಪಾವತಿಸಿ ಟೆಂಡರ್ ಕಂ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದಾಗಿದೆ.

| ಕ್ರ.ಸಂ. | ವಲಯದ ಹೆಸರು | ವಾಹನಗಳ ವಿವರ ಮತ್ತು ವಾಹನದ ನೋಂದಾವಣೆ ಸಂಖ್ಯೆ | ಟೆಂಡರ್ ದಿನಾಂಕ ಸ್ಥಳ ಹಾಗೂ ಸಮಯ | ಹರಾಜಿನ ದಿನಾಂಕ ಸ್ಥಳ ಹಾಗೂ ಸಮಯ |
|---|---|---|---|---|
| 1 | 2 | 3 | 4 | 5 |
| 1 | ಚನ್ನಗಿರಿ | ಲಾರಿ ಎಂವೈಯು 3505 | ದಿ: 10.1.2005 ಚನ್ನಗಿರಿ ವಲಯ ಕಛೇರಿಯಲ್ಲಿ ಬೆಳಿಗ್ಗೆ 10.30 ರಿಂದ ಮಧ್ಯಾಹ್ನ 12.00 ರ ತನಕ | ದಿ: 10.1.2005 ಚನ್ನಗಿರಿ ವಲಯ ಕಛೇರಿ ಆವರಣ ಅಪರಾಹ್ನ 12.30 ರಿಂದ |

| ಕ್ರ.ಸಂ. | ವಲಯದ ಹೆಸರು | ವಾಹನಗಳ ವಿವರ ಮತ್ತು ವಾಹನದ ನೋಂದಾವಣೆ ಸಂಖ್ಯೆ | ಟೆಂಡರ್ ದಿನಾಂಕ ಸ್ಥಳ ಹಾಗೂ ಸಮಯ | ಹರಾಜಿನ ದಿನಾಂಕ ಸ್ಥಳ ಹಾಗೂ ಸಮಯ |
|---|---|---|---|---|
| 2 | | ವ್ಯಾನು ಸಿಎಎಸ್ 967 | ದಿ: 10.1.2005 ಚನ್ನಗಿರಿ ವಲಯ ಕಛೇರಿಯಲ್ಲಿ ಬೆಳಿಗ್ಗೆ 10.30 ರಿಂದ ಮಧ್ಯಾಹ್ನ 12.00 ರ ತನಕ | ದಿ: 10.1.2005 ಚನ್ನಗಿರಿ ವಲಯ ಕಛೇರಿ ಆವರಣ ಅಪರಾಹ್ನ 12.30 ರಿಂದ |
| 3 | | ಕಾರು ಎಂಇಕ್ಯೂ 3113 | ” | ” |
| 4 | | ಕಾರು ಎಂಇಜಿ 6481 | ” | ” |
| 5 | | ಅಶೋಕ್ ಲೈಲ್ಯಾಂಡ್ ಲಾರಿ ಎಂಇಡಿ 7098 | ” | ” |
| 6 | ಶಾಂತಿಸಾಗರ | ಸುಜಿಕಿ ಮ್ಯಾಕ್ಸ್ 100 ಸಿಎನ್‌ವೈ 1820 | ದಿ: 10.1.2005 ಶಾಂತಿಸಾಗರ ವಲಯ ಅರಣ್ಯಾಧಿಕಾರಿಗಳ ಕಛೇರಿ ಮಧ್ಯಾಹ್ನ 2.30 ರಿಂದ 3.30 ಗಂಟೆ ತನಕ | ದಿ: 10.1.2005 ಶಾಂತಿಸಾಗರ ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣ ಮಧ್ಯಾಹ್ನ 4.00 ಗಂಟೆಯಿಂದ |
| 7 | | ಲಾರಿ ಎಂವೈಎ 3919 | ” | ” |
| 8 | ಭದ್ರಾವತಿ | ಲಾರಿ ಎಂವೈಎ 9120 | ದಿ: 11.1.2005 ಭದ್ರಾವತಿ ವಲಯ ಕಛೇರಿ ಬೆಳಿಗ್ಗೆ 10.30 ರಿಂದ ಅಪರಾಹ್ನ 12.00 ರವರೆಗೆ | ದಿ: 11.1.2005 ಭದ್ರಾವತಿ ವಲಯ ಕಛೇರಿ ಆವರಣ ಅಪರಾಹ್ನ 12.30 ರಿಂದ |
| 9 | | ಲಾರಿ ಸಿಎಎ 2658 | ” | ” |
| 10 | | ಆಟೋರಿಕ್ಷಾ ಸಿಎನ್‌ಎಸ್ 4064 | ” | ” |
| 11 | | ಸ್ಕೂಟರ್-ಸಿಎಸಿ 6724 | ” | ” |
| 12 | | ಸ್ಕೂಟರ್-ಸಿಟಿಕ್ಯೂ-4279 | ” | ” |
| 13 | | ಕೈನಟಿಕ್ ಚಾಲೆಂಜರ್ ಕೆ.ಎ. 14-8918 | ” | ” |
| 14 | | ಮಾರುತಿ ಕಾರು-ಕೆಎ 20-ಎಂ-2049 | ” | ” |
| 15 | | ಇಂಡಿಕಾ ಕಾರು ಕೆಎಲ್ 11-ಜೆ-1820 | ” | ” |
| 16 | | ಟ್ರಕರ್ ಟ್ರ್ಯಾಕ್ಸಿ ಸಿಟಿಕ್ಯೂ 678 | ” | ” |
| 17 | | ಆಟೋರಿಕ್ಷಾ-ಕೆಎ-18-4449 | ” | ” |
| 18 | | ಬಜಾಜ್ ಸ್ಕೂಟರ್-ಎಂಇಜಿ-8098 | ” | ” |
| 19 | ಉಂಬಳೆ ಬೈಲು | ಸುಜಿಕಿ ಫಿಯೋರ್ ಮೋಟಾರ್ ಬೈಕ್ ಕೆಎ-18-ಜೆ-4617 | ದಿ: 11.1.2005 ಉಂಬಳೆಬೈಲು ವಲಯ ಅರಣ್ಯಾಧಿಕಾರಿಗಳ ಕಛೇರಿ ಮಧ್ಯಾಹ್ನ 2.30 ರಿಂದ 3.30 ಗಂಟೆ ತನಕ | ದಿ: 11.1.2005 ಉಂಬಳೆಬೈಲು ವಲಯ ಕಛೇರಿ ಆವರಣ ಮಧ್ಯಾಹ್ನ 4.00 ಗಂಟೆಯಿಂದ |
| 20 | | ಮಹೇಂದ್ರ ಜೀಪು ಕೆಎ-19-ಎಂ-1162 | ” | ” |
| 21 | | ಕೈನಟಿಕ್ ಸ್ಕೂಟರ್ ಕೆಎ-17-ಕ್ಯೂ-731 | ” | ” |
| 22 | | ಲೈಲ್ಯಾಂಡ್ ಲಾರಿ ಓಎಸ್‌ಯು-2540 | ” | ” |
| 23 | ತರೀಕೆರೆ | ಎಂ 80 ದ್ವಿಚಕ್ರ ವಾಹನ ಕೆಎ-18 ಜೆ 7314 | ದಿ: 12.1.2005 ತರೀಕೆರೆ ವಲಯ ಕಛೇರಿಯಲ್ಲಿ ಬೆಳಿಗ್ಗೆ 10.30 ರಿಂದ ಅಪರಾಹ್ನ 12.30 ರವರೆಗೆ | ದಿ: 12.1.2005 ತರೀಕೆರೆ ವಲಯ ಕಛೇರಿ ಆವರಣ ಅಪರಾಹ್ನ 12.30 ರಿಂದ |
| 24 | | ಮೆಟಡೋರ್ ವ್ಯಾನ್-ಸಿಎಎನ್-182 | ” | ” |
| 25 | | ಅಂಬಾಸಿಡರ್ ಕಾರು-ಸಿಎನ್ಎ-6453 | ” | ” |

| ಕ್ರ.ಸಂ. | ವಲಯದ ಹೆಸರು | ವಾಹನಗಳ ವಿವರ ಮತ್ತು ವಾಹನದ ನೋಂದಾವಣೆ ಸಂಖ್ಯೆ | ಟೆಂಡರ್ ದಿನಾಂಕ ಸ್ಥಳ ಹಾಗೂ ಸಮಯ | ಹರಾಜಿನ ದಿನಾಂಕ ಸ್ಥಳ ಹಾಗೂ ಸಮಯ |
|---|---|---|---|---|
| 26 | | ಅಂಬಾಸಿಡರ್ ಕಾರು-ಎಂವೈಕ್ಯೂ-1217 | ದಿ: 12.1.2005 ತರೀಕೆರೆ ವಲಯ ಕಛೇರಿಯಲ್ಲಿ ಬೆಳಿಗ್ಗೆ 10.30 ರಿಂದ ಅಪರಾಹ್ನ 12.30 ರವರೆಗೆ | ದಿ: 12.1.2005 ತರೀಕೆರೆ ವಲಯ ಕಛೇರಿ ಆವರಣ ಅಪರಾಹ್ನ 12.30 ರಿಂದ |
| 27 | | ಲಾರಿ-ಎಂವೈಟಿ 3908 | ” | ” |
| 28 | | ಬಜಾಜ್ ಎಂ 80 ಸ್ಕೂಟರ್ ಕೆಎ-14-ಇ-1764 | ” | ” |
| 29 | | ಲಾರಿ-ಕೆಎ-06-316 | ” | ” |
| 30 | | ಆಟೋರಿಕ್ಷಾ-ಕೆಎ-14-1513 | ” | ” |
| 31 | | ಸುಜಿಕಿ ಸಮುರಾಯ್ ಬೈಕ್ ಕೆ.18-ಇ-6671 | ” | ” |
| 32 | | ಅಂಬಾಸಿಡರ್ ಕಾರು- ಎಂವೈಜಿ-5707 | ” | ” |
| 33 | | ಮಾರುತಿ ಓಮಿನಿ ವ್ಯಾನು-ಕೆ-01-ಎನ್-2170 | ” | ” |
| 34 | | ಆಟೋರಿಕ್ಷಾ ಕೆಎ-18-3260 | ” | ” |

1. ಪ್ರತಿಯೊಬ್ಬ ಬಿಡ್ದುದಾರರು ನಾಲ್ಕು ಚಕ್ರದ ವಾಹನದ ಬಿಡ್ಡಿಗೆ ರೂ. 10,000/- ಪ್ರತಿ ವಾಹನಕ್ಕೆ ಹಾಗೂ ದ್ವಿಚಕ್ರ ವಾಹನದ ಬಿಡ್ಡಿಗೆ ರೂ. 3000/- ಪ್ರತಿ ವಾಹನಕ್ಕೆ ಮುಂಗಡ ಠೇವಣಿ / (ಇಎಂಡಿ) ಯನ್ನು ಪ್ರತ್ಯೇಕವಾಗಿ ಹರಾಜು ಪ್ರಾರಂಭವಾಗುವುದಕ್ಕಿಂತ ಮುಂಚಿತವಾಗಿ ಕಟ್ಟಿ ರಶೀದಿ ಪಡೆಯತಕ್ಕದ್ದು.
2. ಮೇಲೆ ತಿಳಿಸಿದ ವಾಹನಗಳ ಸಂಖ್ಯೆ ಕೇವಲ ಅಂದಾಜಿನದಾಗಿದ್ದು, ಮೇಲೆ ಹೆಸರಿಸಿದ ವಾಹನಗಳಲ್ಲಿ ಯಾವುದಾದರೂ ವಾಹನಗಳನ್ನು ಇಲಾಖಾ ಉಪಯೋಗಕ್ಕಾಗಿ ಹಂಚಿಕೆ ಮಾಡಿದ್ದಲ್ಲಿ ಅಥವಾ ನ್ಯಾಯಾಲಯದಿಂದ ತಡೆಯಾಜ್ಞೆ ಬಂದಲ್ಲಿ ಅಥವಾ ಇನ್ನಾವುದೇ ಕಾರಣಕ್ಕಾಗಿ ವಾಹನಗಳನ್ನು ಟೆಂಡರ್ ಕಂ ಹರಾಜಿನಿಂದ ಕೈಬಿಡುವ ಅಧಿಕಾರ ಕೆಳಸಹಿದಾರರಿಗಿರುತ್ತದೆ.
3. ಟೆಂಡರ್ ಕಂ ಹರಾಜಿನಲ್ಲಿ ಯಶಸ್ವಿಯಾದ ವ್ಯಕ್ತಿಗಳು ವಾಹನ ಖರೀದಿಸಿದ ಮೊತ್ತದ ಶೇಕಡ 50 ರಷ್ಟು ಹಣ ಮತ್ತು ಚಾಲ್ತಿ ದರದಲ್ಲಿ ಪೂರ್ಣ ತೆರಿಗೆಯನ್ನು ಹರಾಜು ಮುಗಿದ ಕೂಡಲೇ ಪಾವತಿ ಮಾಡತಕ್ಕದ್ದು.
4. ಟೆಂಡರ್‌ನ್ನು ಮೇಲ್ಕಂಡ ಕಲಂ 4 ರಲ್ಲಿ ತೋರಿಸಿರುವ ದಿನಾಂಕ ಸ್ಥಳ ಹಾಗೂ ಸಮಯದಲ್ಲಿ ನಡೆಸಲಾಗುವುದು. ಟೆಂಡರ್ ಫಾರಂಗಳನ್ನು ನಿಗದಿತ ಬೆಲೆ ಹಾಗೂ ಚಾಲ್ತಿ ತೆರಿಗೆಯನ್ನು ಪಾವತಿಸಿ ಪಡೆಯಬಹುದು.
5. ವಾಹನಗಳ ಬಹಿರಂಗ ಹರಾಜನ್ನು ಕಲಂ 5 ರಲ್ಲಿ ತೋರಿಸಿರುವ ದಿನಾಂಕ ಸ್ಥಳ ಹಾಗೂ ಸಮಯದಲ್ಲಿ ನಡೆಸಲಾಗುವುದು. ಬಹಿರಂಗ ಹರಾಜು ಮುಗಿದ ಕೂಡಲೇ ಸೀಲ್ಡ್ ಟೆಂಡರ್ ಲಕೋಟೆಗಳನ್ನು ತೆರೆಯಲಾಗುವುದು.
6. ಟೆಂಡರ್ ಹಾಗೂ ಹರಾಜಿಗೆ ಪ್ರತ್ಯೇಕ ಇಎಂಡಿ ಯನ್ನು ಕಟ್ಟತಕ್ಕದ್ದು.
7. ಬಿಡ್ಡನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಎಲ್ಲಾ ಅಧಿಕಾರವು ಈ ಕೆಳಸಹಿದಾರರಿಗೆ ಇದ್ದು ಅವರ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.
8. ಇ.ಎಂ.ಡಿ. ಕಟ್ಟಿದ ವ್ಯಕ್ತಿಗಳಿಗೆ ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುತ್ತದೆ.
9. ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ವ್ಯಕ್ತಿಗಳು ಚುನಾವಣಾಧಿಕಾರಿಗಳು ನೀಡಿದಂತಹ ಗುರುತಿನ ಚೀಟಿ, ಪಡಿತರ ಚೀಟಿ ಇಲ್ಲವೇ ಡ್ರೈವಿಂಗ್ ಲೈಸೆನ್ಸ್ ಇತ್ಯಾದಿಗಳ ಪ್ರತಿಯನ್ನು ಒಪ್ಪಿಸಿ ಭಾಗವಹಿಸತಕ್ಕದ್ದು.
10. ಹರಾಜಿನ ಇತರೆ ಷರತ್ತು ಮತ್ತು ಹೆಚ್ಚಿನ ಮಾಹಿತಿಗಳಿಗೆ ಸಂಬಂಧಿಸಿದ ವಲಯ ಅರಣ್ಯಾಧಿಕಾರಿಗಳ ಕಛೇರಿಯಲ್ಲಿ ಅಥವಾ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಭದ್ರಾವತಿ ವಿಭಾಗ, ಭದ್ರಾವತಿ ಇವರ ಕಛೇರಿಯ ಕೆಲಸದ ವೇಳೆಯಲ್ಲಿ ಸಂಪರ್ಕಿಸಲು ಕೋರಿದೆ.

ಪಿ.ಆರ್. 571

**ಸೀಮಾ ಗರ್ಗ್**

ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ.

## ಲೋಕೋಪಯೋಗಿ ಇಲಾಖೆ

## ಕಾರ್ಯಪಾಲಕ ಅಭಿಯಂತರರ ಕಾರ್ಯಾಲಯ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ

## ಟೆಂಡರ್ ಪ್ರಕಟಣೆ

## (ಎರಡು ಲಕೋಟೆ ಪದ್ಧತಿಯಲ್ಲಿ)

**ನಂ. ಇಎನ್‌ಹೆಚ್/ಚಿ/ಸ.ಇ-2/ಟೆಂ.ಪ್ರ./ನಿಯತಕಾಲಿಕ ನವೀಕರಣ/2004-05/3235, ದಿನಾಂಕ: 13ನೇ ಡಿಸೆಂಬರ್ 2004**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಎರಡು ಲಕೋಟೆ ಪದ್ಧತಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೋಂದಾಯಿಸಿದ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಹಾಗೂ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಅನುಮೋದಿತ ಸಂಸ್ಥೆಗಳಿಂದ ಆಹ್ವಾನಿಸಲಾಗಿದೆ. ಎರಡು ಲಕೋಟೆ ಪದ್ಧತಿಯಲ್ಲಿ (1) ತಾಂತ್ರಿಕ ಬಿಡ್ (ಭಾಗ 1) ಮತ್ತು (2) ಆರ್ಥಿಕ ಬಿಡ್ (ಭಾಗ 2) ಗಳಾಗಿರುತ್ತವೆ. ಬಿಡ್‌ಗಳನ್ನು ಎರಡು ಭಾಗಗಳಲ್ಲಿ ಎರಡು ಮೊಹರಾದ ಹಾಗೂ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎಂದು ಪ್ರತ್ಯೇಕವಾಗಿ ನಮೂದಿಸಲ್ಪಟ್ಟ ಲಕೋಟೆಗಳನ್ನು ಮತ್ತೊಂದು

ಮೊಹರಾದ ಲಕೋಟೆಯಲ್ಲಿಟ್ಟು ಹಾಗೂ ಕೆಲಸದ ಹೆಸರನ್ನು ನಮೂದಿಸಲ್ಪಟ್ಟು ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಹಾಗೂ ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ದಿನಾಂಕ: 10.1.2005 ರಂದು ಸಾಯಂಕಾಲ 4.00 ಗಂಟೆಯವರೆಗೆ ಕೆಪಿಡಬ್ಲ್ಯೂಡಿ ಕೋಡ್ ಭಾಗ-2, ಫಾರಂ ನಂ. ಪಿಡಬ್ಲ್ಯೂಜಿ 65 ಹಾಗೂ 66ರ ನಿಬಂಧನೆಗಳು, ಗುತ್ತಿಗೆ ಷೆಡ್ಯೂಲ್‌ನ ವಿಶೇಷ ನಿಬಂಧನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು ಸ್ವೀಕರಿಸಲಾಗುವುದು. ತಾಂತ್ರಿಕ ಬಿಡ್ ಭಾಗ-1 ನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದಂಥ ಗುತ್ತಿಗೆದಾರರ ಆರ್ಥಿಕ ಬಿಡ್ ಲಕೋಟೆಗಳನ್ನು ಮಾತ್ರ ತೆರೆಯಲಾಗುತ್ತದೆ. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ, ಮುಂದೆ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.

ಟೆಂಡರು ಕರೆ ಸಂಖ್ಯೆ: **ಮೊದಲನೇ ಕರೆ**

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗದಿಪಡಿಸಿದ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು (ಇಎಂಡಿ) (ಮೊತ್ತ ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ + ಟ್ಯಾಕ್ಸ್ ಮರು ಪಾವತಿಯಾಗದ | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣಗೊಳಿಸುವ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|---|
| 1 | ರಾಷ್ಟ್ರೀಯ ಹೆದ್ದಾರಿ - 13 ಸೊಲ್ಲಾಪುರ-ಮಂಗಳೂರು ಸೆಕ್ಷನ್‌ನ ರ ಕಿ.ಮೀ. 440 ರಿಂದ 450 ರವರೆಗೆ ನಿಯತಕಾಲಿಕ ನವೀಕರಣದ ಕಾಮಗಾರಿ | ರೂ. 63.00 | ರೂ. 63,000/- | ರೂ. 7000 + 9% ಕೆಎಸ್‌ಟಿ + 15% ಸರ್‌ಚಾರ್ಜ್ ಆನ್ ಕೆ.ಎಸ್.ಟಿ. | ರಸ್ತೆ ನವೀಕರಣದ ಕಾಮಗಾರಿ | 3 ತಿಂಗಳು ಮಳೆಗಾಲ ಸಹಿತ |
| 2 | ರಾಷ್ಟ್ರೀಯ ಹೆದ್ದಾರಿ - 13 ಸೊಲ್ಲಾಪುರ-ಮಂಗಳೂರು ಸೆಕ್ಷನ್‌ನ ರ ಕಿ.ಮೀ. 558 ರಿಂದ 570 ರವರೆಗೆ ನಿಯತಕಾಲಿಕ ನವೀಕರಣದ ಕಾಮಗಾರಿ | ರೂ. 89.00 | ರೂ. 89,000/- | ರೂ. 9000 + 9% ಕೆಎಸ್‌ಟಿ + 15% ಸರ್‌ಚಾರ್ಜ್ ಆನ್ ಕೆ.ಎಸ್.ಟಿ. | ರಸ್ತೆ ನವೀಕರಣದ ಕಾಮಗಾರಿ | 3 ತಿಂಗಳು ಮಳೆಗಾಲ ಸಹಿತ |

**ಷರತ್ತುಗಳು:-**

1) ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗದಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಡಿಮ್ಯಾಂಡ್ ಡ್ರಾಫ್ಟ್ ಅನ್ನು ಕಾರ್ಯನಿರ್ವಾಹಕ ಅಭಿಯಂತರು ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು. ಗುತ್ತಿಗೆದಾರರು, ಗುತ್ತಿಗೆದಾರರ ನೋಂದಾವಣಿ ಪತ್ರದ ಪ್ರತಿ ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (ಸಂಬಂಧಪಟ್ಟ ಇಲಾಖೆಯಿಂದ ಪಡೆದು) ಹಾಗೂ ಕಾಮಗಾರಿಗೆ ನಿಗದಿಪಡಿಸಿದ ಯಂತ್ರೋಪಕರಣಗಳ ಮಾಲೀಕತ್ವದ ಪ್ರಮಾಣ ಪತ್ರಗಳು, ಈ ಎಲ್ಲಾ ದಾಖಲೆಗಳನ್ನು ವಿಭಾಗ ಮಟ್ಟದ ಅಧಿಕಾರಿಗಳಿಗೆ ಕಡಿಮೆಯಿಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಿದ ಪ್ರತಿಗಳನ್ನು ಅರ್ಜಿಯ ಜೊತೆಯಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

2) ಟೆಂಡರು ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ.

| | | |
|---|---|---|
| ಅ | ಖಾಲಿ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ | 28.12.2004 (ಕಛೇರಿ ವೇಳೆಯಲ್ಲಿ) |
| ಆ | ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ | 5.1.2005 ರಿಂದ 6.1.2005 ರವರೆಗೆ (ಕಛೇರಿ ವೇಳೆಯಲ್ಲಿ) |
| ಇ | ಪೂರ್ತಿಗೊಳಿಸಿದ ಮೊಹರಾದ ಟೆಂಡರುಗಳನ್ನು ಸಲ್ಲಿಸುವ ದಿನಾಂಕ | 10.1.2005, ಮಧ್ಯಾಹ್ನ 4.00 ಗಂಟೆಯವರೆಗೆ ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಈ | ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | 10.1.2005, ಸಾಯಂಕಾಲ 5.00 ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಉ | ತಾಂತ್ರಿಕವಾಗಿ ಅರ್ಹವಾದ ತಾಂತ್ರಿಕ ಬಿಡ್‌ಗಳ ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | 17.1.2005, ಸಾಯಂಕಾಲ 5.00 ಅಥವಾ ಆನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |

**ತಾಂತ್ರಿಕ ಬಿಡ್‌ಗಳಿಗೆ ಷರತ್ತುಗಳು:**

1. ಇ.ಎಂ.ಡಿ. ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ: ಎಫ್.ಡಿ.ಆರ್: ಪೇ ಆರ್ಡರ್ : ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ ಅಥವಾ ರಾಷ್ಟ್ರೀಯ ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ವನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ. ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದ ಅಥವಾ ಒತ್ತೆ ಇಡಲಾದಲ್ಲಿ ತಾಂತ್ರಿಕ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡದೆ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಟೆಂಡರ್ ಫಾರಂನಲ್ಲಿರುವ ಪಿ.ಡಬ್ಲ್ಯೂ.ಜಿ-66 ಕ್ಕೆ ಅನುಗುಣವಾಗಿರತಕ್ಕದ್ದು.

2. ಈ ಟೆಂಡರ್‌ನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಟ್ ಲಯಾಬಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ. ಕಾಮಗಾರಿಯಲ್ಲಿ ನಿರ್ವಹಿಸಬೇಕಾದ ಕೆಲಸಗಳು ಅತ್ಯುನ್ನತ ಗುಣಮಟ್ಟದಿಂದ ಕೂಡಿದ್ದು ಒಂದು ವರ್ಷದವರೆಗೆ ಯಾವುದೇ ರಿಪೇರಿಯ ಸಾಧ್ಯತೆಗಳಿರುವುದಿಲ್ಲ. ಈ ಮೇಲ್ಕಂಡ ರೀಚಿನ ಕಾಮಗಾರಿಗೆ ಈ ಒಂದು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು : ಸಂಸ್ಥೆಯವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರ : ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು. ಇ.ಎಂ.ಡಿ : ಎಸ್.ಡಿ. ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು.

3. ಪ್ರತಿ ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವವನ್ನು ಹೊಂದಿರಬೇಕು ಹಾಗೂ ತಾಂತ್ರಿಕ ಬಿಡ್‌ನ ಜೊತೆಯಲ್ಲಿ ಸಂಬಂಧಪಟ್ಟ ಮಾಲೀಕತ್ವದ ಸಾಕ್ಷಿಯನ್ನು ಈ ಕೆಳಕಂಡಂತೆ ಸಲ್ಲಿಸತಕ್ಕದ್ದು. ಮೇಲಿನ ಮಾಲೀಕತ್ವದ ಸಾಕ್ಷಿಗಳಿಲ್ಲದ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

| ಕ್ರಮ ಸಂಖ್ಯೆ | ಯಂತ್ರೋಪಕರಣಗಳು | ಬೇಕಾದ ಸಂಖ್ಯೆ | ಮಾಲೀಕತ್ವದ ಪುರಾವೆಗಳು |
|---|---|---|---|
| 1 | 40/60 ಟಿ.ಪಿ.ಹೆಚ್. ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ (ಎಂ.ಓ.ಆರ್.ಟಿ ಮತ್ತು ಹೆಚ್ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ) | ಒಂದು (1) | ಖರೀದಿಸಿದ ಇನ್‌ವಾಯ್ಸ್ : ಸೆಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 2 | ಪೇವರ್ ಫಿನಿಷರ್ ಸೆನ್ಸಾರ್‌ನೊಂದಿಗೆ | ಒಂದು (1) | -ಸದರಿ- |
| 3 | ವೈಬ್ರೇಟರಿ ರೋಲರ್ | ಒಂದು (1) | -ಸದರಿ- |
| 4 | ಸ್ಟ್ಯಾಟಿಕ್ ರೋಡ್‌ರೋಲರ್ | ಎರಡು (2) | -ಸದರಿ- |
| 5 | ಮೆಕ್ಯಾನಿಕಲ್ ಸ್ಪ್ರೇಯರ್ | ಎರಡು (2) | -ಸದರಿ- |
| 6 | ಟಿಪ್ಪರ್‌ಗಳು | ನಾಲ್ಕು (4) | ಆರ್.ಟಿ.ಓ. ರವರಿಂದ ಪಡೆದ ರಿಜಿಸ್ಟ್ರೇಷನ್ ಸರ್ಟಿಫಿಕೇಟ್ |
| 7 | ಎಕ್ಸ್‌ವೇಟರ್ | ಒಂದು (1) | ಮಾಲೀಕತ್ವದ ಪ್ರಮಾಣ ಪತ್ರ |

4. ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು. ಅಥವಾ ಗುತ್ತಿಗೆದಾರರು ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು. ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು. ಇಲ್ಲವಾದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.

5. ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರ್‌ಗಿಟ್ಟ ಮೊತ್ತದ ಶೇಕಡಾ 30 ರಷ್ಟು ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್‌ಅನ್ನು" ಕಡ್ಡಾಯವಾಗಿ ತಾಂತ್ರಿಕ ಬಿಡ್‌ನಲ್ಲಿ ನಿಗದಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು. "ಲೈನ್ ಆಫ್ ಕ್ರೆಡಿಟ್‌ಅನ್ನು" ಸಲ್ಲಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.

6. ತಾಂತ್ರಿಕ ಬಿಡ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ವಿಭಾಗಮಟ್ಟದ ಅಧಿಕಾರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಬಿಡ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

7. ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಒದಗಿಸತಕ್ಕದ್ದು. ಕಂಪನಿಯ ವಿವರಗಳು : ಏಜೆನ್ಸಿಗಳು : ಸಂಸ್ಥೆಯ ಪ್ರೊಫೈಲ್‌ಅನ್ನು ಲಗತ್ತಿಸತಕ್ಕದ್ದು.

8. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.

9. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.

10. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.

11. ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಬಿ. ಪ್ರಭಾಕರ ಶೆಟ್ಟಿ**

ಪಿ.ಆರ್. 572 ಕಾರ್ಯಪಾಲಕ ಅಭಿಯಂತರರು, ರಾ.ಹೆ. ವಿಭಾಗ, ಚಿತ್ರದುರ್ಗ.

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-4**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ತೋಇ:ಜಸಂನಿ/ಸತೋಅ:5:2004-05, ದಿನಾಂಕ: 25ನೇ ನವೆಂಬರ್ 2004**

**ವಿಷಯ:** 2004-05ನೇ ಸಾಲಿಗೆ ಹನಿನೀರಾವರಿ ಸಹಾಯಧನ ಯೋಜನೆಯಡಿ ಹನಿನೀರಾವರಿ ಉಪಕರಣಗಳ ಸರಬರಾಜು ಹಾಗೂ ಅಳವಡಿಸಲು ದರ ಒಪ್ಪಂದಕ್ಕಾಗಿ ಟೆಂಡರ್ ಪ್ರಕಟಣೆ.

2004-05ನೇ ಸಾಲಿಗೆ ಹನಿನೀರಾವರಿ ಸಹಾಯಧನ ಯೋಜನೆಯಡಿ ಹನಿನೀರಾವರಿ ಉಪಕರಣಗಳ ಸರಬರಾಜು ಮಾಡಲು ಹಾಗೂ ರೈತರ ತಾಕಿನಲ್ಲಿ ಅಳವಡಿಸಲು ದರ ಒಪ್ಪಂದಕ್ಕಾಗಿ ಅರ್ಹ ಟೆಂಡರ್‌ನ್ನು ಆಹ್ವಾನಿಸಿದೆ. ರಾಜ್ಯ ಸರ್ಕಾರದ ಈ ಸಹಾಯಧನ ಯೋಜನೆಗಾಗಿ 2004-05ನೇ ಸಾಲಿಗೆ ಅಂದಾಜು ರೂ. 22.42 ಕೋಟಿ ನಿಗದಿಪಡಿಸಿದೆ. ಖಾಲಿ ಟೆಂಡರ್ ಫಾರಂ ಮತ್ತು ಟೆಂಡರ್ ದಾಖಲೆಯನ್ನು ಆಸಕ್ತಿಯುಳ್ಳ ಉತ್ಪಾದಕರು

ತೋಟಗಾರಿಕೆ ಜಂಟಿ ನಿರ್ದೇಶಕರು (ಜಲಸಂಪನ್ಮೂಲ ನಿರ್ವಹಣೆ) ಲಾಲ್‌ಬಾಗ್, ಬೆಂಗಳೂರು-4, ರವರ ಕಛೇರಿಯಿಂದ ರೂ. 300 (ಮೂರುನೂರು ಮಾತ್ರ) ಗಳನ್ನು ಸಂದಾಯ ಮಾಡಿ ಪಡೆದುಕೊಳ್ಳುವುದು.

ಇ.ಎಂ.ಡಿ. ಮೊತ್ತ ರೂ. 1.00 ಲಕ್ಷ (ಒಂದು ಲಕ್ಷ ರೂಪಾಯಿ ಮಾತ್ರ) ವನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4, ರವರ ಹೆಸರಿನಲ್ಲಿ Crossed Demand Draft ಪಡೆದು ಟೆಂಡರ್ ಫಾರಂನೊಂದಿಗೆ ಸಲ್ಲಿಸತಕ್ಕದ್ದು.

ಟೆಂಡರ್ ಫಾರಂ ಮತ್ತು ದಾಖಲಾತಿಗಳನ್ನು ದಿನಾಂಕ: 24.12.2004 ರವರೆಗೆ ಎಲ್ಲಾ ಕೆಲಸದ ದಿನಗಳಲ್ಲಿ ಸಮಯ 10.00 ಘಂಟೆಯಿಂದ 5.00 ಘಂಟೆಯವರೆಗೆ ಪಡೆಯಬಹುದು. ಭರ್ತಿ ಮಾಡಿ ಮೊಹರಾದ ಟೆಂಡರ್‌ಗಳನ್ನು ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-4, ಇಲ್ಲಿ ಸಲ್ಲಿಸಬೇಕಿದ್ದು ಇದನ್ನು ದಿನಾಂಕ: 27.12.2004 ರಂದು ಸಂಜೆ 4.00 ಘಂಟೆ ಒಳಗಾಗಿ ಮುದ್ದಾಂ ಅಥವಾ ಅಂಚೆ ಮುಖಾಂತರ ಸಲ್ಲಿಸಬೇಕು.

ದಿನಾಂಕ: 28.12.2004 ರಂದು ಬೆಳಿಗ್ಗೆ 11.00 ಘಂಟೆಗೆ ಕಿರು ಸಭಾಂಗಣ, ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-4, ಇಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು. ಟೆಂಡರ್ ದಾಖಲೆಗಳನ್ನು ಹಸ್ತಾಂತರಗೊಳಿಸಬಾರದು.

ಪಿ.ಆರ್. 573 ತೋಟಗಾರಿಕೆ ನಿರ್ದೇಶಕರು.

## ಜಿಲ್ಲಾ ಪೊಲೀಸ್ ಕಛೇರಿ, ತುಮಕೂರು

## ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ: ಲೆಕ್ಕ(2)ಎಂಟಿ.52/2004-05, ದಿನಾಂಕ: 17ನೇ ಡಿಸೆಂಬರ್ 2004**

**ವಿಷಯ:** ನಿರುಪಯುಕ್ತಗೊಳಿಸಿದ ವಾಹನಗಳ ಹಳೆಯ ಟೈರು, ಟ್ಯೂಬ್ ಮತ್ತು ಇತರೆ ನಿರುಪಯುಕ್ತ ಬಿಡಿಭಾಗಗಳನ್ನು ಟೆಂಡರ್ ಕಂ ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಆದೇಶ ಪತ್ರ ಸಂಖ್ಯೆ: ಹೆಚ್‌ಡಿ/198 ಇಎಂವಿ/2000, ಬೆಂಗಳೂರು ದಿನಾಂಕ: 19.6.2003.
2) ಪ್ರಧಾನ ಕಛೇರಿ ಹಿಂಬರಹ ಸಂ: ವಾಸಾ(3)/1/97-98, ದಿನಾಂಕ: 24.7.2004.
3) ಕೇಂದ್ರ ವಲಯ ಕಛೇರಿ ಪತ್ರ ಸಂ: ಲೆಕ್ಕ/ಎಂ.ಟಿ. 47/02-03, ದಿನಾಂಕ: 6.8.2004.

ಮೇಲಿನ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೂಲಕ ಸಾರ್ವಜನಿಕರ ಮಾಹಿತಿಗಾಗಿ ತಿಳಿಯಪಡಿಸುವುದೇನೆಂದರೆ, ಈ ಕೆಳಕಂಡ ನಿರುಪಯುಕ್ತ ಬಿಡಿ ಭಾಗಗಳು ಟೈರು, ಟ್ಯೂಬ್, ಬ್ಯಾಟರಿ, ಸ್ಕ್ರಾಪ್ ಮತ್ತು ಸುಟ್ಟ ಆಯಿಲ್ ಇತರೆ ವಸ್ತುಗಳನ್ನು ತುಮಕೂರಿನ ಬಟವಾಡಿಯಲ್ಲಿರುವ ಜಿಲ್ಲಾ ಸಶಸ್ತ್ರ ಮೀಸಲು ಪಡೆ ಕಛೇರಿ, ಆವರಣದಲ್ಲಿ ದಿ: 31.1.2005 ರಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಹರಾಜು ಮಾಡಲಾಗುವುದು.

| ಕ್ರ. ಸಂ. | ವಿವರಗಳು | 1998 ರಿಂದ 1999 | 1999 ರಿಂದ 2000 | 2000 ರಿಂದ 2001 | 2001 ರಿಂದ 2002 | 2002 ರಿಂದ 2003 | 2003 ರಿಂದ 2004 | ಒಟ್ಟು |
|---|---|---|---|---|---|---|---|---|
| **ಟೈರು ಮತ್ತು ಟ್ಯೂಬ್‌ಗಳು** | | | | | | | | |
| 1 | 3.25-16 | 02 | 02 | 06 | 04 | 02 | - | 16 |
| 2 | 3.25-19 | 02 | 02 | 14 | 06 | - | - | 24 |
| 3 | 5.90-15 | 10 | 05 | 10 | 05 | 05 | - | 35 |
| 4 | 78-ಆರ್-15 | - | - | 10 | 05 | 05 | - | 20 |
| 5 | 600 x 16 | 10 | 50 | 60 | 10 | 65 | 60 | 255 |
| 6 | 700 x 15 | 07 | - | - | - | 07 | - | 14 |
| 7 | 750 x 16 | - | - | 10 | 05 | - | - | 15 |
| 8 | 750 x 20 | 07 | - | - | - | 07 | - | 14 |
| 9 | 700 x 16 | - | - | - | - | 05 | - | 05 |
| 10 | 450 x 12 | 05 | - | 05 | - | - | - | 10 |
| **ಬ್ಯಾಟರಿ ಮತ್ತು ಇತರೆ** | | | | | | | | |
| 11 | 6 ವೋಲ್ಟ್ಸ್ 7 ಪ್ಲಾಟ್ಸ್ | 09 | 05 | 08 | 04 | - | 01 | 27 |
| 12 | 6 ವೋಲ್ಟ್ಸ್ 9 ಪ್ಲಾಟ್ಸ್ | - | 02 | - | 02 | - | - | 04 |
| 13 | 12 ವೋಲ್ಟ್ಸ್ 11 ಪ್ಲಾಟ್ಸ್ | 01 | 01 | 01 | 01 | - | - | 04 |
| 14 | 12 ವೋಲ್ಟ್ಸ್ 13 ಪ್ಲಾಟ್ಸ್ | 12 | 18 | 14 | 11 | 27 | 13 | 95 |
| 15 | 12 ವೋಲ್ಟ್ಸ್ 17 ಪ್ಲಾಟ್ಸ್ | 01 | 01 | 01 | - | - | - | 03 |

| ಕ್ರ. ಸಂ. | ವಿವರಗಳು | 1998 ರಿಂದ 1999 | 1999 ರಿಂದ 2000 | 2000 ರಿಂದ 2001 | 2001 ರಿಂದ 2002 | 2002 ರಿಂದ 2003 | 2003 ರಿಂದ 2004 | ಒಟ್ಟು |
|---|---|---|---|---|---|---|---|---|
| 16 | 12 ವೋಲ್ಟ್ಸ್ 25 ಪ್ಲಾಟ್ಸ್ | - | - | - | 01 | - | - | 01 |
| 17 | ನಿರುಪಯುಕ್ತ ಕಬ್ಬಿಣದ ಹಳೆ ಬಿಡಿಭಾಗಗಳು | | | | | | | 2400 ಕೆ.ಜಿ |
| 18 | ಉಪಯೋಗಿಸಿದ ಹಳೆ ಆಯಿಲ್ ಸುಟ್ಟಿದ್ದು | | | | | | | 1550 ಲೀ |
| 19 | ಐರನ್ ಹಳೆ ಕ್ಯಾನ್‌ಗಳು ಚಿಕ್ಕವು | | | | | | | 135 ಸಂ. |
| 20 | ಪ್ಲಾಸ್ಟಿಕ್ ಕ್ಯಾನುಗಳು ಚಿಕ್ಕವು | | | | | | | 60 ಸಂ. |
| 21 | ಐರನ್ ಬ್ಯಾರಲ್‌ಗಳು ದೊಡ್ಡವು | | | | | | | 50 ಸಂ. |
| 22 | ಹಳೆ ಉಪಯೋಗಿಸಿದ ಪೇಪರ್ | | | | | | | 300 ಕೆ.ಜಿ |

**ಹರಾಜಿನ ನಿಬಂಧನೆಗಳು:**

1. ನಿರುಪಯುಕ್ತ ಟೈರ್, ಬ್ಯಾಟರಿ ಮತ್ತು ಬಿಡಿಭಾಗಗಳು ಯಾವ ಸ್ಥಿತಿಯಲ್ಲಿವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.
2. ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸುವ ಮುನ್ನ ನಗದು ರೂಪದಲ್ಲಿ ರೂ. 1,000.00 ಗಳ ಠೇವಣಿಯನ್ನು ಕಛೇರಿಯಲ್ಲಿ ಪಾವತಿಸತಕ್ಕದ್ದು, ಹರಾಜು ಪ್ರಾರಂಭವಾದ ನಂತರ ಬಿಡ್‌ದಾರರಿಂದ ಠೇವಣಿ ಹಣವನ್ನು ಪಡೆಯಲಾಗುವುದಿಲ್ಲ ಹಾಗೂ ಠೇವಣಿ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡುವುದಿಲ್ಲ. ಠೇವಣಿ ಕಟ್ಟದೇ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.
3. ಆಸಕ್ತ ಬಿಡ್‌ದಾರರು (ಸಹಕಾರ ಸಂಘಗಳ ಮತ್ತು ಇತರೆ ಸಂಸ್ಥೆಗಳು ಸೇರಿದಂತೆ) ಮುಚ್ಚಿದ ಲಕೋಟೆಯಲ್ಲಿ ಟೆಂಡರ್‌ಗಳನ್ನು ಸಲ್ಲಿಸತಕ್ಕದ್ದು. **"ವಾಹನದ ನಿರುಪಯುಕ್ತ ಬಿಡಿಭಾಗಗಳನ್ನು, ಟೈರ್, ಟ್ಯೂಬ್ ಮತ್ತು ಬ್ಯಾಟರಿಗಳನ್ನು ಖರೀದಿಸುವ ಬಗ್ಗೆ"** ಎಂದು ಲಕೋಟೆಯ ಮೇಲೆ ಬಿಡಿ ಅಕ್ಷರಗಳಲ್ಲಿ ನಮೂದಿಸಿ ಜಿಲ್ಲಾ ಪೊಲೀಸ್ ಅಧೀಕ್ಷಕರ ಕಛೇರಿಯಲ್ಲಿ ಖುದ್ದಾಗಿ ಸಲ್ಲಿಸತಕ್ಕದ್ದು.
4. ಪೂರ್ಣಗೊಳಿಸಿದ ಟೆಂಡರ್‌ಗಳನ್ನು ದಿನಾಂಕ: 27.1.2005 ರಂದು ಸಂಜೆ 5.00 ಗಂಟೆಯ ಒಳಗಾಗಿ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
5. ಪೊಲೀಸ್ ಅಧೀಕ್ಷಕರು, ತುಮಕೂರು ರವರು ಬಹಿರಂಗ ಹರಾಜು ನಡೆಸುವರು.
6. ಟೆಂಡರ್ ಫಾರಂನಲ್ಲಿ ಅತಿ ಹೆಚ್ಚಿನ ದರವನ್ನು ಅಂಕಿ ಮತ್ತು ಅಕ್ಷರಗಳಲ್ಲಿಯೂ ಬರೆದಿರಬೇಕು. ಟೆಂಡರ್ ಫಾರಂನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಇದ್ದರೆ ಆ ಸ್ಥಳದಲ್ಲಿಯೇ ಟೆಂಡರ್‌ದಾರರು ಪೂರ್ಣ ಸಹಿ ಮಾಡತಕ್ಕದ್ದು. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
7. ಟೆಂಡರ್ ಸಲ್ಲಿಸಿದ ಬಿಡ್‌ದಾರರಿಂದ ಅಥವಾ ಠೇವಣಿ ತುಂಬಿದ ಬಿಡ್‌ದಾರರಿಂದ ಹರಾಜು ನಡೆಯುವ ದಿನದಂದು ಬಹಿರಂಗ ಬಿಡ್‌ಗಳನ್ನು ಪಡೆಯಲಾಗುವುದು.
8. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬಿಡ್ ದರವನ್ನು ದಾಖಲಿಸಿಕೊಳ್ಳಲಾಗುತ್ತದೆ. ಯಾರು ಅತೀ ಹೆಚ್ಚಿನ ದರವನ್ನು ಸೂಚಿಸುವರೋ ಅವರನ್ನು ಯಶಸ್ವಿ ಬಿಡ್‌ದಾರರೆಂದು ಪರಿಗಣಿಸಲಾಗುವುದು.
9. ನಿರುಪಯುಕ್ತ ವಾಹನ ಬಿಡಿಭಾಗಗಳ ಟೈರ್, ಟ್ಯೂಬ್ ಮತ್ತು ಬ್ಯಾಟರಿಗಳ ಮೇಲೆ ನಿಯಮ ಪ್ರಕಾರ ಚಾಲ್ತಿಯಲ್ಲಿರುವ ತೆರಿಗೆಯನ್ನು ವಿಧಿಸಲಾಗುವುದು.
10. ಹರಾಜು ಮುಗಿದ ತಕ್ಷಣವೇ ಯಶಸ್ವಿಯಾಗದ ಬಿಡ್‌ದಾರರ ಠೇವಣಿಯನ್ನು ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.
11. ಯಶಸ್ವಿಯಾದ ಬಿಡ್‌ದಾರರು/ಟೆಂಡರ್‌ದಾರರು ಹರಾಜಿನ ಒಟ್ಟು ಬೆಲೆಯ ಶೇಕಡ 25 ರಷ್ಟು ಮೊತ್ತವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ನಗದು ರೂಪದಲ್ಲಿ ಹರಾಜಿನ ದಿನವೇ ಪಾವತಿಸಬೇಕು. ಡಿ.ಡಿ. ಮತ್ತು ಚೆಕ್ ಮುಖಾಂತರ ತುಂಬಿದ ಹಣವನ್ನು ಸ್ವೀಕರಿಸಲಾಗುವುದಿಲ್ಲ.
12. ಹರಾಜು ಮಾಡುವ ವೇಳೆಯಲ್ಲಿ ಯಾವುದೇ ವಾದ-ವಿವಾದ ಉದ್ಭವಿಸಿದಲ್ಲಿ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರುರವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
13. ಹರಾಜು ಮಾಡಲಾದ ನಿರುಪಯುಕ್ತ ಬಿಡಿಭಾಗಗಳನ್ನು ಟೈರ್, ಟ್ಯೂಬ್ ಹಾಗೂ ಬ್ಯಾಟರಿಗಳನ್ನು 7 ದಿವಸದೊಳಗಾಗಿ ತಮ್ಮ ಸ್ವಂತ ವೆಚ್ಚದಿಂದ ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದ್ದಲ್ಲಿ ಅವರು ತುಂಬಿದ ಹಣವನ್ನು, ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು.
14. ಹರಾಜಿನಲ್ಲಿ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮವಾದದ್ದು.
15. ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಬಿಡ್‌ದಾರರು ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹ ಟೆಂಡರ್‌ದಾರರು ಮುಂಗಡವಾಗಿ ಕಟ್ಟಲಾದ ಹಣದಲ್ಲಿ ವಸೂಲಿ ಮಾಡುವ ಅಧಿಕಾರವನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ರವರ ತೀರ್ಮಾನಕ್ಕೆ ಒಳಪಟ್ಟಿರುತ್ತದೆ. ಹಾಗೂ ಅಂತಹ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು. ತಪ್ಪಿದ್ದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ಬದ್ಧವಾಗಿ ಕ್ರಮ ತೆಗೆದುಕೊಳ್ಳಲಾಗುವುದು.
16. ಆಸಕ್ತ ಬಿಡ್‌ದಾರರು ಕಛೇರಿ ವೇಳೆಯಲ್ಲಿ ನಿರುಪಯುಕ್ತ ವಾಹನ ಬಿಡಿಭಾಗಗಳನ್ನು ಟೈರು ಮತ್ತು ಟ್ಯೂಬ್‌ಗಳನ್ನು ಹಾಗೂ ಬ್ಯಾಟರಿಗಳನ್ನು ತುಮಕೂರಿನ ಬಟವಾಡಿಯಲ್ಲಿರುವ ಜಿಲ್ಲಾ ಸಶಸ್ತ್ರ ಮೀಸಲು ಪಡೆ ಕಚೇರಿ ಆವರಣದಲ್ಲಿ ಪರಿಶೀಲಿಸಬಹುದು.

ಪಿ.ಆರ್. 574

ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ.